# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಮಾನ್ಯ ಸದಸ್ಯರ ಹೆಸರು | : | ಶ್ರೀ ಕವಟಗಿಮಠ ಮಹಾಂತೇಶ ಮಲ್ಲಿಕಾರ್ಜುನ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ) |
| ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ | : | **2509** |
| ಉತ್ತರಿಸಬೇಕಾದ ದಿನಾಂಕ | : | 31.03.2021 |
| ಉತ್ತರಿಸಬೇಕಾದ ಸಚಿವರು | : | ವಸತಿ ಸಚಿವರು |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ದೇವರಾಜು ಅರಸು ವಸತಿ ಯೋಜನೆಯಡಿ ವಿಶೇಷ ವರ್ಗದ ವಸತಿಹೀನ ಅಂಗವಿಕಲರು, ವಿಧವೆಯರಿಗೆ ವಸತಿ ನೀಡುವ ಯೋಜನೆಯಲ್ಲಿ ಅನುದಾನ ಸಮರ್ಪಕವಾಗಿ ಬಿಡುಗಡೆಯಾಗದೇ ಯೋಜನೆಯ ಅನುಷ್ಠಾನ ಕುಂಠಿತವಾಗಿರುವ ಮತ್ತು ಫಲಾನುಭವಿಗಳು ಅನುದಾನ ಬಿಡುಗಡೆಗಾಗಿ ಸರ್ಕಾರಿ ಕಛೇರಿಗಳಿಗೆ ಅಲೆದಾಡುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ದೇವರಾಜು ಅರಸು ವಸತಿ ಯೋಜನೆಯಡಿ ವಿಶೇಷ ವರ್ಗದ ವಸತಿಹೀನ ಅಂಗವಿಕಲರು, ವಿಧವೆಯರಿಗೆ ವಸತಿ ಸೌಲಭ್ಯ ಪಡೆಯಲು ಜಿಲ್ಲಾಧಿಕಾರಿಗಳು ಜಿಲ್ಲಾ ಸಮಿತಿಯಲ್ಲಿ ಆಯ್ಕೆಯಾದ ಫಲಾನುಭವಿಗಳನ್ನು ನಮೂದಿಸಿ ಅನುಮೋದನೆ ಪಡೆದುಕೊಳ್ಳುವ ಪ್ರಕ್ರಿಯೆ ಚಾಲ್ತಿಯಲ್ಲಿರುತ್ತದೆ.<br><br>ನಂತರ ಫಲಾನುಭವಿಯ ಹಂತವಾರು ಛಾಯಾ ಚಿತ್ರವನ್ನು ಜಿಪಿಎಸ್ ಗೆ ಅಳವಡಿಸಿ ನಿಗಮದ ಹಂತದಲ್ಲಿ ಆಡಿಟ್ ನಲ್ಲಿ ಪರಿಶೀಲಿಸಿ ಅರ್ಹ ಫಲಾನುಭವಿಗಳಿಗೆ ಆಧಾರ್ ಆಧಾರಿತ ಬ್ಯಾಂಕ್ ಖಾತೆಗೆ ನೇರವಾಗಿ ಅನುದಾನವನ್ನು ಬಿಡುಗಡೆ ಮಾಡಲು ಕ್ರಮ ವಹಿಸಲಾಗುತ್ತಿದೆ.<br><br>ಮುಂದುವರೆದು, ಸಂಬಂಧಪಟ್ಟ ಯೋಜನೆಯ ಅನುಷ್ಠಾನಾಧಿಕಾರಿಗಳು, ಮನೆಗಳ ಹಂತಾವಾರು ಛಾಯಾ ಚಿತ್ರಗಳನ್ನು ಸೆರೆಹಿಡಿದು ವೆಬ್ ಸೈಟ್ ಗೆ ಅಪ್ ಲೋಡ್ ಮಾಡಿದ ನಂತರ ನಿಗಮದ ಹಂತದಲ್ಲಿ ಆಡಿಟ್ ವಿಭಾಗದಿಂದ ಛಾಯಾ ಚಿತ್ರಗಳನ್ನು ಪರಿಶೀಲಿಸಿ, ಸದರಿ ಪ್ರಕ್ರಿಯೆಯಲ್ಲಿ ಅರ್ಹಗೊಂಡಿರುವ ಫಲಾನುಭವಿಗಳಿಗೆ ಆಧಾರ್ ಆಧಾರಿತ ಬ್ಯಾಂಕ್ ಖಾತೆಗೆ ನೇರವಾಗಿ ಅನುದಾನ ಬಿಡುಗಡೆ ಮಾಡಲಾಗುತ್ತಿದೆ. ಅನರ್ಹಗೊಂಡಿರುವ ಫಲಾನುಭವಿಗಳಿಗೆ ಅನುದಾನ ಬಿಡುಗಡೆಯನ್ನು ತಡೆ ಹಿಡಿಯಲಾಗುತ್ತಿದೆ. |
| ಆ) | 2018-19, 2019-20 ಮತ್ತು 2020-21 ನೇ ಸಾಲಿನಲ್ಲಿ ಬೆಳಗಾವಿ ಜಿಲ್ಲೆಗೆ ಎಷ್ಟು ಅರ್ಹ ಫಲಾನುಭವಿಗಳಿಗೆ ವಸತಿ ನೀಡುವ ಗುರಿ ನೀಡಲಾಗಿತ್ತು; | ದೇವರಾಜ್ ಅರಸು ವಸತಿ ಯೋಜನೆಯಡಿ ಬೆಳಗಾವಿ ಜಿಲ್ಲೆಗೆ 2020-21 ನೇ ಸಾಲಿನಲ್ಲಿ ವಿಧವೆಯರುಗಳಿಗೆ 1726 |

| | | |
|---|---|---|
| | ಒದಗಿಸಲಾದ ಅನುದಾನ ಎಷ್ಟು; ಈಗಾಗಲೇ ಎಷ್ಟು ಅನುದಾನ ಫಲಾನುಭವಿಗಳಿಗೆ ಬಿಡುಗಡೆಯಾಗಿದೆ; (ವಿವರ ಒದಗಿಸುವುದು) | ಮನೆಗಳು ಮತ್ತು ಅಂಗವಿಕಲರುಗಳಿಗೆ 153 ಮನೆಗಳು ಒಟ್ಟು 1879 ಮನೆಗಳ ಗುರಿಯನ್ನು ನೀಡಿದ್ದು, ನಿಗಮದ ವೆಬ್‌ಸೈಟ್ ನಲ್ಲಿ ಗುರಿ ನಿಗಧಿಪಡಿಸಲಾಗಿರುತ್ತದೆ. ಹೀಗೆ ಗುರಿ ನಿಗಧಿಯಾದ ಫಲಾನುಭವಿಗಳ ಅನುಮೋದನೆ ಪ್ರಕ್ರಿಯೆ ಚಾಲ್ತಿಯಲ್ಲಿದೆ. |
| ಇ) | 2018-19, 2019-20 ಮತ್ತು 2020-21 ನೇ ಸಾಲಿನಲ್ಲಿ ಬೆಳಗಾವಿ ಜಿಲ್ಲೆಗೆ ನೀಡಿದ್ದ ಒಟ್ಟು ಗುರಿಯಲ್ಲಿ ಈವರೆಗೆ ಆಗಿರುವ ಪ್ರಗತಿಯೇನು; ಎಷ್ಟು ಮಂದಿ ಫಲಾನುಭವಿಗಳು ಸಂಪೂರ್ಣ ಮನೆ ಕಟ್ಟಿಕೊಂಡಿದ್ದಾರೆ; ಉಳಿದವು ಯಾವ ಹಂತದಲ್ಲಿವೆ; ಬಾಕಿ ಉಳಿಯಲು ಕಾರಣಗಳೇನು; (ವಿವರ ಒದಗಿಸುವುದು) | |
| (ಈ) | ಯಾವ ಕಾಲಮಿತಿಯಲ್ಲಿ ಸದರಿ ಯೋಜನೆಯನ್ನು ಸಂಪೂರ್ಣವಾಗಿ ಅನುಷ್ಠಾನಗೊಳಿಸಲಾಗುವುದು ? | ಸರ್ಕಾರದ "ಮನೆ" ಮಾರ್ಗಸೂಚಿಯನ್ವಯ ನಿಗಮದಿಂದ ಕಾಮಗಾರಿ ಆದೇಶ ನೀಡಿದ 90 ದಿನಗಳೊಳಗಾಗಿ ಫಲಾನುಭವಿಯು ಮನೆಯ ಕಾಮಗಾರಿಯನ್ನು ಪ್ರಾರಂಭಿಸಬೇಕಿದ್ದು, ಒಂದು ವರ್ಷದೊಳಗಾಗಿ ಮನೆಯನ್ನು ಪೂರ್ಣಗೊಳಿಸಬೇಕಾಗಿರುತ್ತದೆ. |

ಸಂಖ್ಯೆ :ವಇ 185 ಹೆಚ್‌ಎಎಂ 2021

(ವಿ. ಸೋಮಣ್ಣ)
ವಸತಿ ಸಚಿವರು